# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 675
ಸದಸ್ಯರ ಹೆಸರು : ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 12.03.2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿ.

| ಪ್ರಶ್ನೆ | ಉತ್ತರ |
|---|---|
| ಅ) ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ಸರ್ಕಾರಿ ನೌಕರರಿಗೆ ಕಡ್ಡಾಯಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಹೌದು. |
| ಆ) ಬಂದಿದ್ದಲ್ಲಿ, ಯಾವಾಗಿನಿಂದ ಕಡ್ಡಾಯಗೊಳಿಸಲಾಯಿತು (ಸಂಬಂಧಿಸಿದ ಎಲ್ಲಾ ಆದೇಶಗಳನ್ನು ನೀಡುವುದು) ಇಲ್ಲಿಯವರೆವಿಗೂ ಪರೀಕ್ಷೆಯಲ್ಲಿ ಉತ್ತೀರ್ಣರಾದ ನೌಕರರ ಸಂಖ್ಯೆ ಎಷ್ಟು ;<br>(ಇಲಾಖಾವಾರು ವಿವರ ನೀಡುವುದು) | ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012ಅನ್ನು ಅಧಿಸೂಚನೆ ಸಂಖ್ಯೆ ಸಿಆಸುಇ 43 ಸೇವನೆ 2008 ದಿನಾಂಕ: 07.03.2012 ರನ್ವಯ ಜಾರಿಗೆ ತರಲಾಗಿದೆ. ಸದರಿ ಅಧಿಸೂಚನೆಯು ದಿನಾಂಕ: 22.03.2012ರ ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟಗೊಂಡಿರುತ್ತದೆ. ಕಂಪ್ಯೂಟರ್ ಸಾಕ್ಷರತಾ ಪರೀಕ್ಷಾ ನಿಯಮಗಳಿಗೆ ಸಂಬಂಧಿಸಿದ ಅಧಿಸೂಚನೆ/ಆದೇಶ/ ಸುತ್ತೋಲೆಗಳ ಪ್ರತಿಯನ್ನು ಅನುಬಂಧ 1 ರಿಂದ 9 ರಲ್ಲಿ ಒದಗಿಸಲಾಗಿದೆ.<br><br>ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ತೆಗೆದುಕೊಳ್ಳಲು ಮೊದಲಿಗೆ ಸಂಬಂಧಿಸಿದ ವೆಬ್‌ಸೈಟ್‌ನಲ್ಲಿ ನೋಂದಣಿ ಮಾಡಬೇಕಾಗಿರುತ್ತದೆ. ನೋಂದಣಿ ಮಾಡುವ ಸಂದರ್ಭದಲ್ಲಿ ನೌಕರರ ಕೆ.ಜಿ.ಐ.ಡಿ. ಸಂಖ್ಯೆ ಹಾಗೂ ಜನ್ಮದಿನಾಂಕವನ್ನು ದಾಖಲಿಸಲು ಮಾತ್ರ ಆಸ್ಪದ ಕಲ್ಪಿಸಲಾಗಿದೆ. ಇಲಾಖೆಯ ವಿವರ ದಾಖಲಿಸಲಾಗುವುದಿಲ್ಲ. |
| ಇ) ಉತ್ತೀರ್ಣರಾದ ನೌಕರರಿಗೆ ಸರ್ಕಾರದ ಆದೇಶದಂತೆ ಪ್ರೋತ್ಸಾಹಧನ ನೀಡಲಾಗಿದೆಯೇ; ಯಾವ ಲೆಕ್ಕ ಶೀರ್ಷಿಕೆಯಲ್ಲಿ ಅನುದಾನವನ್ನು ಒದಗಿಸಲಾಗಿದೆ ಹಾಗೂ ಪ್ರೋತ್ಸಾಹಧನ ನೀಡಿರುವ ನೌಕರರ ಸಂಖ್ಯೆ ಎಷ್ಟು ; | ಇಲ್ಲ.<br><br>ಸರ್ಕಾರಿ ನೌಕರರು ವೇತನ ಪಡೆಯುವ ಲೆಕ್ಕ ಶೀರ್ಷಿಕೆಯಡಿ "subsidiary expenses" ಉಪ ಲೆಕ್ಕಶೀರ್ಷಿಕೆಯಡಿ ಪ್ರೋತ್ಸಾಹಧನವನ್ನು ಭರಿಸಬಹುದೆಂದು ಆರ್ಥಿಕ ಇಲಾಖೆಯಿಂದ ಸೂಚನೆ ಪಡೆಯಲಾಗಿದೆ. ಆದರೆ, ಪ್ರಸ್ತುತ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ಸರ್ಕಾರಿ ನೌಕರರಿಗೆ ಅಧಿಕೃತ ಡಿಜಿಟಲ್ ಪ್ರಮಾಣ ಪತ್ರ ನೀಡುವ ವಿಷಯವು ಪರಿಶೀಲನೆಯಲ್ಲಿದ್ದು, ಈ ವಿಷಯವು ಇತ್ಯರ್ಥವಾದ ನಂತರ ರೂ.5,000/-ಗಳ ಪ್ರೋತ್ಸಾಹ ಧನವನ್ನು ಪಾವತಿ ಮಾಡಲು ಕ್ರಮ ಕೈಗೊಳ್ಳಲಾಗುವುದು. |
| ಈ) ನೀಡದಿದ್ದಲ್ಲಿ, ಕಾರಣ ಏನು ; ಪ್ರೋತ್ಸಾಹ ಧನ ನೀಡಲು ಸರ್ಕಾರದಿಂದ ಯಾವ ಕ್ರಮ ಕೈಗೊಳ್ಳಲಾಗುವುದು ? | |

ಸಂಖ್ಯೆ: ಸಿಆಸುಇ 19 ಸೇವನೆ 2020

(ಬಿ. ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ.

ಅನುಬಂಧ-1

# ಕರ್ನಾಟಕ ಸರ್ಕಾರ

ಸಂಖ್ಯೆ: ಸಿಆಸುಇ 43 ಸೇವನೆ 2008

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ:07.03.2012.

## ಅಧಿಸೂಚನೆ

ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2009ರ ಕರಡನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ 2(ಎ) ಉಪ ಪ್ರಕರಣವನ್ನು ಪ್ರಕರಣ 8ರೊಂದಿಗೆ ಓದಿಕೊಂಡು ಅದರಲ್ಲಿ ಅಗತ್ಯಪಡಿಸಲಾದಂತೆ ದಿನಾಂಕ 13.1.2009ರ ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯ ಭಾಗ-IV-Aರಲ್ಲಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 43 ಎಸ್‌ಸಿಆರ್ 2008, ದಿನಾಂಕ 13.1.2009ರಲ್ಲಿ ಪ್ರಕಟಿಸಿ, ಅದರಿಂದ ಬಾಧಿತರಾಗಬಹುದಾದಂತಹ ಎಲ್ಲ ವ್ಯಕ್ತಿಗಳಿಂದ ಅಧಿಕೃತ ರಾಜ್ಯಪತ್ರದಲ್ಲಿ ಆ ಕರಡು ನಿಯಮಗಳು ಪ್ರಕಟವಾದ ದಿನಾಂಕದಿಂದ 15 ದಿನಗಳ ಒಳಗಾಗಿ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಲಾಗಿತ್ತು;

ಸದರಿ ರಾಜ್ಯಪತ್ರವನ್ನು ದಿನಾಂಕ 13.1.2009ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದುದರಿಂದ;

ಮತ್ತು, ಸದರಿ ಕರಡಿನ ಬಗ್ಗೆ ಆಕ್ಷೇಪಣೆ/ಸಲಹೆಗಳು ಸ್ವೀಕೃತವಾಗಿದ್ದು ಅವುಗಳನ್ನು ರಾಜ್ಯ ಸರ್ಕಾರವು ಪರಿಶೀಲಿಸಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ, 14)ರ 3ನೇ ಪ್ರಕರಣದ (1)ನೇ ಉಪ ಪ್ರಕರಣವನ್ನು 8ನೇ ಪ್ರಕರಣದೊಂದಿಗೆ ಓದಿಕೊಂಡಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ನಿಯಮಗಳನ್ನು ರಚಿಸುತ್ತದೆ, ಎಂದರೆ :-

## ನಿಯಮಗಳು

1. ಶೀರ್ಷಿಕೆ, ಪ್ರಾರಂಭ ಮತ್ತು ಅನ್ವಯ :- (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012 ಎಂದು ಕರೆಯತಕ್ಕದ್ದು.

(2) ಇವು, ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

-2

(3) ವಾಹನ ಚಾಲಕರು, ಪ್ರಾಥಮಿಕ ಶಾಲಾ ಶಿಕ್ಷಕರು, ಪೊಲೀಸ್ ಕಾನ್ಸ್‌ಟೇಬಲ್‌ಗಳು, ನರ್ಸ್‌ಗಳು, ರೇಷ್ಮೆ ಪ್ರದರ್ಶಕರು, ಅರಣ್ಯ ರಕ್ಷಕರು, ಅಬಕಾರಿ ರಕ್ಷಕರು, ಆರೋಗ್ಯ ಕಾರ್ಯಕರ್ತರು, ಅರಣ್ಯ ವೀಕ್ಷಕರು, ಬೇಲಿಫ್ಸ್ ಮತ್ತು ಪ್ರೊಸಸ್ ಸರ್ವರ್‌ಗಳು ಮತ್ತು ಡಿ ಗುಂಪಿನ ಹುದ್ದೆಗಳು ಈ ಹುದ್ದೆಗಳಿಗೆ ಆಯ್ಕೆಗೊಳ್ಳುವ ಅಥವಾ ಈ ಹುದ್ದೆಗಳನ್ನು ಹೊಂದಿರುವ ವ್ಯಕ್ತಿಗಳಿಗೆ ಹಾಗೂ ಕಾಲಕಾಲಕ್ಕೆ ಸರ್ಕಾರವು ಅಧಿಸೂಚಿಸಬಹುದಾದ ಇತರ ಹುದ್ದೆಗಳಿಗೆ ಈ ನಿಯಮಗಳು ಅನ್ವಯವಾಗತಕ್ಕದ್ದಲ್ಲ.

2. <u>ನೇರ ನೇಮಕಾತಿಗೆ ಆಯ್ಕೆ ಪ್ರಕ್ರಿಯೆ</u>:- ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977 ಅಥವಾ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರಡಿಯಲ್ಲಿ ಯಾವುದೇ ಸೇವೆ ಅಥವಾ ಹುದ್ದೆಗೆ ಸಂಬಂಧಿಸಿದಂತೆ ವಿಶೇಷವಾಗಿ ರಚಿಸಿರುವ ಅಥವಾ ರಚಿಸಲಾಗಿದೆ ಎಂದು ಭಾವಿಸಲಾದ, ನೇಮಕಾತಿ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ ಯಾವುದೇ ಹುದ್ದೆಗೆ ಆಯ್ಕೆಯಾದ ಅಭ್ಯರ್ಥಿಯು, ನಿಯಮ 1ರ ಉಪನಿಯಮ (3)ರಲ್ಲಿ ನಿರ್ದಿಷ್ಟಪಡಿಸಿರುವ ಹುದ್ದೆಗಳನ್ನು ಹೊರತುಪಡಿಸಿ, ಸರ್ಕಾರವು ನಿಗದಿಪಡಿಸಿರುವ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ಶೇಕಡ 60 ಅಂಕಗಳಿಗೆ ಕಡಿಮೆ ಇಲ್ಲದಂತೆ ಪಡೆದು ಆಯ್ಕೆಯಾದ ಮೂರು ತಿಂಗಳೊಳಗೆ ಪಾಸು ಮಾಡದಿದ್ದಲ್ಲಿ, ಅಂತಹ ಅಭ್ಯರ್ಥಿಯನ್ನು ನೇಮಕ ಮಾಡತಕ್ಕದ್ದಲ್ಲ. ಅಂತಹ ಪರೀಕ್ಷೆಯನ್ನು ಸರ್ಕಾರ ಅಥವಾ ಅದು ಅನುಮೋದಿಸಿದ ಏಜೆನ್ಸಿಯು ನಡೆಸತಕ್ಕದ್ದು.

3. <u>ಸೇವೆಯಲ್ಲಿರುವ ಅಭ್ಯರ್ಥಿಗಳಿಗೆ ಅನ್ವಯಿಸುವುದು</u> :- ಪ್ರತಿಯೊಬ್ಬ ಸರ್ಕಾರಿ ನೌಕರನು, ನಿಯಮ 1ರ ಉಪ ನಿಯಮ (3)ರಲ್ಲಿ ನಿರ್ದಿಷ್ಟಪಡಿಸಿರುವ ಹುದ್ದೆಗಳಲ್ಲಿರುವವರನ್ನು ಹೊರತುಪಡಿಸಿ, ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಗೆ ಹಾಜರಾಗಿ ಶೇಕಡ 35ಕ್ಕಿಂತ ಕಡಿಮೆ ಇಲ್ಲದಂತೆ ಅಂಕಗಳನ್ನು ಗಳಿಸಿ ಪಾಸು ಮಾಡುವುದು ಕಡ್ಡಾಯ ಮಾಡತಕ್ಕದ್ದು. ಈ ಪರೀಕ್ಷೆಯನ್ನು ಸರ್ಕಾರ ಅಥವಾ ಅದು ಅನುಮೋದಿಸಿದ ಏಜೆನ್ಸಿಯು ನಡೆಸತಕ್ಕದ್ದು. ಯಾವುದೇ ಸರ್ಕಾರಿ ನೌಕರನು, ಈ ನಿಯಮಗಳ ಪ್ರಾರಂಭದ ದಿನಾಂಕದಿಂದ ಮೂರು ವರ್ಷಗಳ ಅವಧಿಯೊಳಗೆ ಪರೀಕ್ಷೆಯಲ್ಲಿ ಉತ್ತೀರ್ಣನಾಗದೇ ಇದ್ದಲ್ಲಿ ಮುಂಬಡ್ತಿಗೆ ಅರ್ಹನಾಗತಕ್ಕದ್ದಲ್ಲ. ಯಾವುದೇ ಸರ್ಕಾರಿ ನೌಕರನು, ಈ ನಿಯಮಗಳ ಪ್ರಾರಂಭದ ದಿನಾಂಕದಿಂದ ನಾಲ್ಕು ವರ್ಷಗಳ ಅವಧಿಯೊಳಗೆ ಪರೀಕ್ಷೆಯಲ್ಲಿ ಉತ್ತೀರ್ಣನಾಗದೇ ಇದ್ದಲ್ಲಿ ವಾರ್ಷಿಕ ವೇತನ ಬಡ್ತಿ ಗಳಿಸಲು ಅರ್ಹನಾಗತಕ್ಕದ್ದಲ್ಲ.

ಪರಂತು, ಈ ಉಪ-ನಿಯಮದಲ್ಲಿರುವುದಾವುದೂ, ಈ ನಿಯಮಗಳ ಪ್ರಾರಂಭದ ದಿನಾಂಕದಂದು 50 ವರ್ಷಗಳ ವಯಸ್ಸಾಗಿರುವ ಸರ್ಕಾರಿ ನೌಕರರಿಗೆ ಅನ್ವಯವಾಗತಕ್ಕದ್ದಲ್ಲ.

-3

(2) ಯಾವುದೇ ವಾಹನ ಚಾಲಕ ಅಥವಾ ಡಿ ಸಮೂಹದ ನೌಕರನು, ಈ ನಿಯಮಗಳ ಪ್ರಾರಂಭದ ದಿನಾಂಕದಿಂದ ಮೂರು ವರ್ಷಗಳ ಅವಧಿಯೊಳಗೆ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಉತ್ತೀರ್ಣನಾಗದ ಹೊರತು, ಕಿರಿಯ ಸಹಾಯಕ/ದ್ವಿತೀಯ ದರ್ಜೆ ಸಹಾಯಕ ಅಥವಾ ಸಮಾನ ಅಥವಾ ಉನ್ನತ ಹುದ್ದೆಯ ವೃಂದಕ್ಕೆ ವರ್ಗಾವಣೆಗೆ ಅಥವಾ ಮುಂಬಡ್ತಿಗೆ ಅರ್ಹನಾಗತಕ್ಕದ್ದಲ್ಲ.

(3) ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವಂಥ 50 ವರ್ಷ ವಯಸ್ಸು ದಾಟಿದ ಸರ್ಕಾರಿ ನೌಕರರನ್ನೂ ಒಳಗೊಂಡಂತೆ ಸೇವಾನಿರತ ನೌಕರರು ಸರ್ಕಾರವು ಅಥವಾ ಸರ್ಕಾರದಿಂದ ಅನುಮೋದಿತ ಏಜೆನ್ಸಿಯು ನೀಡುವ ಪ್ರಮಾಣ ಪತ್ರವನ್ನು ಹಾಜರುಪಡಿಸುವುದಕ್ಕೆ ಒಳಪಟ್ಟು ಅವರುಗಳಿಗೆ ರೂ. 5,000/-ಗಳ (ಐದು ಸಾವಿರ ರೂಪಾಯಿಗಳು) ಪ್ರೋತ್ಸಾಹ ಧನವನ್ನು ಸಂದಾಯ ಮಾಡತಕ್ಕದ್ದು.

4. ಯಾವುದೇ ವ್ಯಕ್ತಿಯು ನೇರ ನೇಮಕಾತಿ ಸಮಯದಲ್ಲಾಗಲೀ ಅಥವಾ ಸೇವಾನಿರತ ಅಭ್ಯರ್ಥಿಯಾಗಿ ಆಗಲೀ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಒಂದು ಸಲ ಉತ್ತೀರ್ಣನಾದಲ್ಲಿ, ಈ ನಿಯಮದಡಿ ಯಾವುದೇ ಉದ್ದೇಶಕ್ಕಾಗಿ ಮತ್ತೊಮ್ಮೆ ಇದೇ ಪರೀಕ್ಷೆಯಲ್ಲಿ ಉತ್ತೀರ್ಣನಾಗುವ ಅವಶ್ಯಕತೆಯಿಲ್ಲ.

5. **ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಗೆ ಪಠ್ಯಕ್ರಮ**:- ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಗೆ ಪಠ್ಯಕ್ರಮವು, ಸರ್ಕಾರವು ಅಧಿಸೂಚಿಸಬಹುದಾದಂಥ ಸಂಖ್ಯೆಯ ಪತ್ರಿಕೆಗಳು, ಅಂತಹಾ ಪರೀಕ್ಷೆ ಪತ್ರಿಕೆಗೆ ಅವಧಿ, ಗರಿಷ್ಠ ಅಂಕಗಳನ್ನು ಒಳಗೊಂಡಿರತಕ್ಕದ್ದು. ಪಠ್ಯಕ್ರಮವನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪ್ರಕಟಿಸತಕ್ಕದ್ದು.

ಕರ್ನಾಟಕ ಸರ್ಕಾರದ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

Devaraju
(ದೇವರಾಜು)
ಸರ್ಕಾರದ ಉಪ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು).

ಇವರಿಗೆ:

ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ, ಇದನ್ನು ಮುಂದಿನ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿ, ಅದರ 1000 ಪ್ರತಿಗಳನ್ನು ಸಿಆಸುಇ (ಸೇವಾ ನಿಯಮಗಳು-ಬಿ) ಶಾಖೆಗೆ ಕಳುಹಿಸತಕ್ಕದ್ದು.

ಪ್ರತಿ :

1) ಸರ್ಕಾರದ ಮುಖ್ಯ ಕಾರ್ಯದರ್ಶಿಯವರು.

2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು

3) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಅಧಿಕಾರಿ.

4) ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು / ಕಾರ್ಯದರ್ಶಿಗಳು.

5) ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿ.

6) ಎಲ್ಲಾ ಇಲಾಖಾ ಮುಖ್ಯಸ್ಥರು.

7) ಎಲ್ಲಾ ವಿಭಾಗಾಧಿಕಾರಿಗಳು.

8) ಎಲ್ಲಾ ಉಪ ಜಿಲ್ಲಾಧಿಕಾರಿಗಳು/ಜಿಲ್ಲಾ ಪಂಚಾಯತ್‌ನ ಕಾರ್ಯನಿರ್ವಹಣಾಧಿಕಾರಿಗಳು

9) *ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ/ಪರಿಷತ್ತು, ಬೆಂಗಳೂರು.

10)*ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗಸೌಧ, ಬೆಂಗಳೂರು.

11)*ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು.

12)*ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು.

13)*ರಿಜಿಸ್ಟ್ರಾರ್, ಕರ್ನಾಟಕ ಆಡಳಿತ ನ್ಯಾಯಮಂಡಳಿ, ಬೆಂಗಳೂರು.

14)ವಾರಪತ್ರ / ಶಾಖಾ ರಕ್ಷಾ ಕಡತ.

(* ಮುಖ ಪತ್ರದೊಡನೆ)

ಅನುಬಂಧ - 2

**GOVERNMENT OF KARNATAKA**

No. DPAR 43 SCR 2008

Karnataka Government Secretariat,
Vidhana Soudha,
Bangalore. Date:18.12.2012

## NOTIFICATION

In exercise of the powers conferred by rule-5 of the Karnataka Civil Services (Computer Literacy Test) Rules, 2012, the Government of Karnataka hereby notifies the Syllabus, Number of papers, duration and maximum marks of the Computer Literacy test for the purpose of the said rule which shall be as specified in the Schedule below, namely:-

## "SCHEDULE

## SYLLABUS FOR COMPUTER LITERACY TEST

(Maximum Marks- 80)
Time- 90 Minutes

1. **Introduction to Computer:-** (5 Marks)
   (a) What is Computer
   (b) Broad Categories of Computers
   (c) Language of Computer
   (d) Basic applications of Computer
   (e) Components of Computer
      - Central Processing Unit (CPU)
      - Input and Output devices
      - Computer memory
      - Concept of hardware and software
   (f) Representation of data concepts of data processing
      - Definition of data
      - Basic data types
      - Storage of data as files

2. **Introduction to Windows and Windows concepts:-**
   (a) What is an Operating System and basics of Window
   (b) The user interface

2---

- Using mouse and moving Icons on the screen
- The My Computer Icon
- The Recycle Bin
- Status bar, Start and Menu
- Running an application
- Windows Explorer Viewing of File, Folders and Directories
- Creating and Renaming files and folders
- Opening and closing different Windows.

(c) Windows setting
- Control Panels
- Wall paper and Screen Savers
- Setting the date and sound
- Concept of menu using help

(d) Advanced Windows
- Using right button of the mouse
- Creating short cuts
- Basics of window setup
- Notepad
- Window Accessories
- cut, copy & paste

**3. WORD PROCESSING IN ENGLISH : MS WORD:-**

(Maximum 20 Marks)

(a) Word Processing Basic
- An introduction to MS WORD
- Opening MS WORD package
- The Menu Bar
- Using the Help
- Using Icons below menu bar

(b) Opening and Closing Documents
- Opening Documents – Save and Save As
- Page set up
- Printing Documents
- Display/Hiding of paragraph marks and inter word space

(c) Moving around in a document
- Scrolling the document –Scrolling by link/paragraph
- Fast scrolling and moving pages

(d) Using a Document/Help Wizard

(e) Text creation and manipulation

- Paragraph and Tab setting
- Text selection
- Cut, Copy and Paste
- Font and size selection
- Bold, Italic and Underline
- Alignment of text –center, Left, Right and Justify

(f) Formatting text:

- Changing font, size and color
- Paragraph indenting
- Bullets and numbering
- Use of Tab and Tab setting
- Changing Case

(g) Handling multiple documents

- Opening and closing multiple documents
- Cut, Copy and paste across the documents
- Saving of clip boards

(h) Table Manipulation:

- Concept of Table - Rows, Columns and cells
- Draw table
- Changing cell width and height
- Alignment of text in cell
- Copying of cell
- Delete/inserting of row or columns
- Borders of table

(i) Printing

- Printing
- Print Preview
- Print selected page
- Mail merge

**4. SPREAD SHEET – MS EXCEL :-** (Maximum 20 Marks)

(a) Elements of Electronics Spread Sheet-MS EXCEL

- Application / usage of Spread sheet
- Opening of MS Excel
- The Menu bar
- Work Book and sheets
- Creation of cells and addressing
- Cell inputting
- Edit features

(b) Manipulation of cells

- Enter text, numbers and dates
- Insertion of cells, rows and columns
- Formatting of cells, rows and columns
- Creation of tables
- Cell height and widths
- Copying and moving cells

(c) Use of formulas

- Usage of basic formulas
- Functions – Financial, Statistical, Date & Time, Math & Trg and Logical

(d) Data Manipulation:-

- Sorting
- Filter
- Subtotal

(e) Window

- Freeze pans
- Split
- Hide

(f) Charts

- What is chart and its usage
- Different types of chart-Column, Bar, Line, Pie etc.
- Creation of chart
- Customization

(g) Spread sheet for small accounting

- Maintaining invoices/budget
- Totaling of Various transactions
- Maintaining daily and monthly sales report
- Preparing monthly salary bills
- Preparing Statistical reports with charts

**5. Computer Communication and Internet:-** (Maximum 10 Marks)

(a) Basic computer networks

- LAN
- Internet
- WAN

(b) Internet

- Concept of Internet
- Application Internet

(c) Service on Internet

- WWW and web sites
- Communication on Internet

(c) Web browsing software
- Internet Explorer
- Netscape Communicator

(d) Surfing the Internet
- Giving URL address
- Search
- Moving around web-site
- Printing or saving portion of web pages
- Down loading

(e) Chatting on Internet

E-Mail:- (Maximum 10 Marks)

(a) Basic of electronic mail
- What is an electronic mail
- E-mail addressing
- Mailbox – inbox and outbox

(b) Using E-Mails
- Viewing
- Sending
- Saving
- Sending same and mail to various users

(c) Document handling
- Sending soft copy as attachment
- Enclosures to E-mail
- Send portion of document as E-mail

**6. Power Point:-** (Maximum 5 Marks)

(a) Basics
- Difference between Document and Presentation
- Using Power Point
- Opening Power Point Presentation
- Using Wizard for creating presentation

(b) Creation of Presentation
- Title
- Text creation
- Font and sizes
- Bullet and indenting
- Moving to next slide

(c) Preparation of slides
- Selection type of slides
- Importing text from documents
- Moving to next slide
- The slide Manager

(d) Providing aesthetics
- Slide Design
- Background and text colors
- Marking your own slide format.
- Footnotes and slide numbering

(e) Slide manipulation and slide show

(f) Presentation of slides
- Using slide show
- Printing the slides and Handouts
- Slide sorter
- Title sorter

**7. Knowledge of Kannada Nudi Software in,-**

(Maximum 10 Marks)

(a) Word Processing;
(b) Spread Sheet;
(c) Power Point Presentation; and
(d) Internet and Communication.

**II. PATTERN OF TESTING :-**

(1) The test shall be online, multiple choice type.
(2) Total questions shall be 80, carrying 1 marks each
(3) Indicative allocation of 80 marks based on syllabus is as follows:-
- (a) Computer fundamentals and Windows – Maximum 5 marks.
- (b) Word Processing- MS Word – Maximum 20 marks.
- (c) Spreadsheet –MS Excel – Maximum 20 marks
- (d) Computer Communications, Internet and e-mail – Maximum 20 marks.
- (e) Nudi Kannada software Knowledge in Word Processing – Maximum 10 marks.
- (f) Power Point – Maximum 5 marks.

**III NUMBER OF PAPERS:-**

(1) There shall be one paper combining both theory and practical configuration questions.
(2) The question paper shall be in both English & Kannada. Candidates can opt any one of the languages."

By Order and in the name of the
Governor of Karnataka.

**(Dr.MANGALA.G.S)**
Under Secretary to Government,
Department of Personnel and
Administrative Reforms
(Service Rules-1).

To: The compiler, Karnataka Gazette for publication in the special issue of the Official Gazette and to supply 1000 copies to the DPAR (Service Rules-B) section immediately

**Copy to:-**

1) The Accountant General, Karnataka, Bangalore
2) The Chief Secretary to Government.
3) The Additional Chief Secretaries to Government.
4) The Additional Chief Secretary to Government and Development Commissioner.
5) All Principal Secretaries : Secretaries to Government.
6) All Regional Commissioners.
7) The Accountant General, Karnataka Bangalore.
8) All Heads of Departments.
9) All Deputy Commissioners/Chief Executive Officers of Zilla Panchayats.
10) *The Secretary, Karnataka Legislative Assembly/Council, Bangalore.
11) *The Secretary, Karnataka Public Service Commission, Udyoga Soudha, Bangalore.
12) *The Registrar General, High Court of Karnataka, Bangalore.
13) *The Registrar, Karnataka Lokayukta, Bangalore.
14) *The Registrar, Karnataka Administrative Tribunal, Indiranagar, Bangaore-560 038.
15) All Sections of the Secretariat.
16) Cabinet Section (C:343:2008, dated: 01.01.2009)
17) Weekly Gazette.
18) Guard File.

(* with a covering letter)

ಅನುಬಂಧ-3

KA / BG - GPO/ 2515 /WPP-47/ 2009 - 2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ಪತ್ರಿಕೆ


| ಭಾಗ – IV-A | ಬೆಂಗಳೂರು, ಮಂಗಳವಾರ, ಆಗಸ್ಟ್ ೭, ೨೦೧೨ (ಶ್ರಾವಣ ೧೬, ಶಕ ವರ್ಷ ೧೯೩೪) | ನಂ. ೫೫೯ |
|---|---|---|


ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಸಿಆಸುಇ 59 ಸೇವನೆ 2012, ಬೆಂಗಳೂರು, ದಿನಾಂಕ: 06.08.2012**

ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012, ಇದನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕೆ ದಿನಾಂಕ:07.07.2012ರ ಅಧಿಸೂಚನೆ ಸಂಖ್ಯೆ: ಸಿಆಸುಇ 59 ಸೇವನೆ 2012 ರಲ್ಲಿ ಪ್ರಕಟಿಸಿರುವ ಈ ಮುಂದಿನ ನಿಯಮಗಳ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಇದರ ಪ್ರಕಟಣೆಯ ದಿನಾಂಕದಿಂದ 15 ದಿನಗಳೊಳಗಾಗಿ ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ ದಿನಾಂಕ: 07.07.2012ರ ಕರ್ನಾಟಕ ರಾಜ್ಯಪತ್ರದ ಭಾಗ–iv ಎ (ಸಂ: 462)ರಲ್ಲಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ (2) ನೇ ಉಪ ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಸದರಿ ರಾಜ್ಯಪತ್ರವನ್ನು 07.07.2012 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡಿನ ಬಗ್ಗೆ ಯಾವುದೇ ಆಕ್ಷೇಪಣೆ/ಸಲಹೆಗಳು ಸ್ವೀಕೃತವಾಗದಿರುವುದರಿಂದ;

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ, 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡ 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಕೆಳಕಂಡ ನಿಯಮಗಳನ್ನು ರಚಿಸುತ್ತದೆ, ಎಂದರೆ:–

## ನಿಯಮಗಳು

1. **ಶೀರ್ಷಿಕೆ ಮತ್ತು ಪ್ರಾರಂಭ:–** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) (ತಿದ್ದುಪಡಿ) ನಿಯಮಗಳು, 2012 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ದಿನಾಂಕ: 22.03.2012 ರಿಂದ (ಮುಖ್ಯ ನಿಯಮಗಳು ಜಾರಿಗೆ ಬಂದ ದಿನಾಂಕ) ಜಾರಿಗೆ ಬಂದಿವೆಯೆಂದು ಭಾವಿಸತಕ್ಕದ್ದು.

2. **ನಿಯಮ 2ಕ್ಕೆ ತಿದ್ದುಪಡಿ:–** ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012ರ ನಿಯಮ 2ರ ಬದಲು ಈ ಕೆಳಕಂಡದ್ದನ್ನು ಪ್ರತಿಸ್ಥಾಪಿಸತಕ್ಕದ್ದು, ಅಂದರೆ:–

"(2) **ನೇರ ನೇಮಕಾತಿಯಾದ ಅಭ್ಯರ್ಥಿಗಳಿಗೆ ಅನ್ವಯಿಸುವಿಕೆ.–**

ಕರ್ನಾಟಕ ಸಿವಿಲ್ ಸೇವಾ( ಸಾಮಾನ್ಯ ನೇಮಕಾತಿ) ನಿಯಮಗಳು, 1977 ಅಥವಾ ವಿಶೇಷವಾಗಿ ರಚಿಸಲಾದ ನೇಮಕಾತಿ ನಿಯಮಗಳು ಅಥವಾ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14) ರಡಿಯಲ್ಲಿ ಯಾವುದೇ ಸೇವೆ ಅಥವಾ ಹುದ್ದೆಗೆ ಸಂಬಂಧಿಸಿದಂತೆ ರಚಿಸಲಾದ ನಿಯಮಗಳಲ್ಲಿ ಏನೇ ಒಳಗೊಂಡಿದ್ದರೂ, ಈ ನಿಯಮಗಳ ನಿಯಮ 1ರ ಉಪನಿಯಮ (3)ರಲ್ಲಿ ನಿರ್ದಿಷ್ಟಪಡಿಸಲಾಗಿರುವ ಹುದ್ದೆಗಳನ್ನು ಹೊರತುಪಡಿಸಿ, ರಾಜ್ಯ ಸಿವಿಲ್ ಸೇವೆಗಳಲ್ಲಿನ ಯಾವುದೇ ಹುದ್ದೆಗೆ ನೇರ ನೇಮಕಾತಿಯ ಮುಖಾಂತರ ನೇಮಕಾತಿ ಹೊಂದಿದ ನೌಕರನು/ಳು ಸರ್ಕಾರ ನಿಗದಿಪಡಿಸಬಹುದಾದ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ಅವರ ಪರಿವೀಕ್ಷಣಾವಧಿಯಲ್ಲಿ ಪಾಸು ಮಾಡತಕ್ಕದ್ದು ಮತ್ತು ಆ ಪರೀಕ್ಷೆಯನ್ನು ಪಾಸು ಮಾಡದ ಹೊರತು ಅವರ ಪರಿವೀಕ್ಷಣಾವಧಿಯನ್ನು ಘೋಷಿಸತಕ್ಕದ್ದಲ್ಲ. ಈ ಪರೀಕ್ಷೆಯನ್ನು ಸರ್ಕಾರವು ಅಥವಾ ಸರ್ಕಾರದಿಂದ ಅನುಮೋದಿಸಲ್ಪಟ್ಟ ಸಂಸ್ಥೆಯು ನಡೆಸತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಡಾ: ಮಂಗಳ ಜಿ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು–1).

ಅನುಬಂಧ -4

RNI No. KARBIL/2001/47147



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**



| ಭಾಗ– IV-A<br>Part– IV-A | ಬೆಂಗಳೂರು, ಸೋಮವಾರ, ಏಪ್ರಿಲ್ ೨೭, ೨೦೧೫ (ವೈಶಾಖ ೦೭, ಶಕ ವರ್ಷ ೧೯೩೭)<br>**Bengaluru, Monday, April 27, 2015 (Vaishakha 07, Shaka Varsha 1937)** | ನಂ. ೩೬೧<br>**No. 361** |
|---|---|---|



**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 154 SCR 2014, Bengaluru, Dated: 27.04.2015**

Whereas the draft of the Karnataka Civil Services (Computer Literacy Test) Rules, 2012, was published as required by clause (a) of sub section (2) section 3 read with section 8 of the Karnataka State Civil Services Act, 1978 ( Karnataka Act 14 of 1990) in Notification No. DPAR 154 SCR 2014, dated 10th April 2015 in part IV A of the Karnataka Gazette Extra –ordinary dated: 10th April 2015 inviting objections and Suggestions from all persons likely to be affected thereby within fifteen days from the date of publication of the draft in the Official Gazette.

Whereas, the said Gazette was made available to the public on 10th April, 2015.

And whereas the objections and suggestions received have been considered by the State Government.

Now, therefore, in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of 1990) the Government of Karnataka hereby makes the following rules, namely;

**RULES**

1. **Title and Commencement:-** (1) These rules may be called the Karnataka Civil Service (Computer Literacy Test) (Amendment) Rules, 2015.

(2) They shall be deemed to have come into force with effect from 22nd day of March, 2012 .

**2. Amendment of Rule 2:-** In the Karnataka Civil Services (Computer Literacy Test) Rules, 2012 (hereinafter referred to as the said rules), in rule 2, for the words " within the period of their probation and the period of probation shall not be declared until he or she passes the said test", the words "within the period of their probation or within a period of five years from the date of commencement of these rules whichever is later" shall be inserted.

**3. Amendment of Rule 3:-** In rule 3 of the said rules,

(a) in sub-rule (1)

(i) for the words "within a period of three years from the date of commencement of these rules", the words "within a period of five years from the date of commencement of these rules" shall be substituted;

(ii) for the words "within a period of four years from the date of commencement of these rules", the words "within a period of six years from the date of commencement of these rules" shall be substituted.

(b) In sub-rule (2), for the words "within a period of three years from the date of commencement of these rules", the words "within a period of five years from the date of commencement of these rules" shall be substituted.

By Order and in the name of the Governor of Karnataka

**Dr. Mangala. G.S.**
Under Secretary to Government
Department of Personnel and
Administrative Reforms (Service Rules-1)

RNI No. KARBIL/2001/47147

ಅನುಬಂಧ - 5



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**


| ಭಾಗ-IVA | ಬೆಂಗಳೂರು, ಶನಿವಾರ, ಜನವರಿ ೨೦, ೨೦೧೮ (ಪುಷ್ಯ ೩೦, ಶಕ ವರ್ಷ ೧೯೩೯) | ನಂ. ೧೧೮ |
|---|---|---|
| **Part-IVA** | ***Bengaluru, Saturday, January 20, 2018 (Pushya 30, Shaka Varsha 1939)*** | **No. 118** |


ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

ಅಧಿಸೂಚನೆ

ಸಂಖ್ಯೆ: ಸಿಆಸುಇ 15 ಸೇವನೆ 2017, ಬೆಂಗಳೂರು, ದಿನಾಂಕ:16.12.2017

ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012, ಇದನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕೆ ದಿನಾಂಕ: 05.07.2017ರ ಅಧಿಸೂಚನೆ ಸಂಖ್ಯೆ: ಸಿಆಸುಇ 15 ಸೇವನೆ 2017 ರಲ್ಲಿ ಪ್ರಕಟಿಸಿರುವ ಈ ಮುಂದಿನ ನಿಯಮಗಳ ಕರಡನ್ನು ಅಧಿಕೃತ ರಾಜ್ಯಪತ್ರದಲ್ಲಿ ಇದರ ಪ್ರಕಟಣೆಯ ದಿನಾಂಕದಿಂದ 15 ದಿನಗಳೊಳಗಾಗಿ ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ ದಿನಾಂಕ:27.07.2017ರ ಕರ್ನಾಟಕ ರಾಜ್ಯಪತ್ರದ ಭಾಗ IV-A ರಲ್ಲಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ (2)ನೇ ಉಪ ಪ್ರಕರಣದ (ಎ) ಖಂಡವನ್ನು ಪ್ರಕರಣ 8ರೊಂದಿಗೆ ಓದಿಕೊಂಡು ಅದರಲ್ಲಿ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಸದರಿ ರಾಜ್ಯಪತ್ರವನ್ನು ದಿನಾಂಕ:27.07.2017ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು, ಸದರಿ ಕರಡಿನ ಬಗ್ಗೆ ಆಕ್ಷೇಪಣೆ/ಸಲಹೆಗಳು ಸ್ವೀಕೃತವಾಗಿದ್ದು ಅವುಗಳನ್ನು ರಾಜ್ಯ ಸರ್ಕಾರವು ಪರಿಗಣಿಸಿರುವುದರಿಂದ ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990 ರ ಕರ್ನಾಟಕ ಅಧಿನಿಯಮ, 14)ರ 3ನೇ ಪ್ರಕರಣದ (1)ನೇ ಉಪ ಪ್ರಕರಣವನ್ನು 8ನೇ ಪ್ರಕರಣದೊಂದಿಗೆ ಓದಿಕೊಂಡಂತೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ನಿಯಮಗಳನ್ನು ರಚಿಸುತ್ತದೆ, ಎಂದರೆ:-

ನಿಯಮಗಳು

**1. ಶೀರ್ಷಿಕೆ ಮತ್ತು ಪ್ರಾರಂಭ:-** (1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) (ತಿದ್ದುಪಡಿ) ನಿಯಮಗಳು, 2017 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ದಿನಾಂಕ: 22.03.2012ರಿಂದ ಜಾರಿಗೆ ಬಂದಿವೆಯೆಂದು ಭಾವಿಸತಕ್ಕದ್ದು.

**2. ನಿಯಮ 2ಕ್ಕೆ ತಿದ್ದುಪಡಿ:-** ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012ರ ನಿಯಮ 2ರಲ್ಲಿ,

(ಎ) "ಸರ್ಕಾರವು ನಿಗದಿಪಡಿಸಿರುವ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು" ಎಂಬ ಪದಗಳ ನಂತರ "ಶೇಕಡಾ 50 ಅಂಕಗಳಿಗೆ ಕಡಿಮೆ ಇಲ್ಲದಂತೆ ಪಡೆದು" ಎಂಬ ಪದಗಳನ್ನು ಸೇರಿಸತಕ್ಕದ್ದು.

(ಬಿ) "ಐದು ವರ್ಷಗಳ" ಎಂಬ ಪದಗಳ ಬದಲಿಗೆ "ಎಂಟು ವರ್ಷಗಳ" ಎಂಬ ಪದಗಳನ್ನು ಪ್ರತಿಸ್ಥಾಪಿಸತಕ್ಕದ್ದು.

**3. ನಿಯಮ 3ಕ್ಕೆ ತಿದ್ದುಪಡಿ:– ಸದರಿ ನಿಯಮಗಳ ನಿಯಮ 3 ರಲ್ಲಿ ,–**

(ಎ) ಉಪ ನಿಯಮ (1)ರಲ್ಲಿ,–

(i) "ಐದು ವರ್ಷಗಳ" ಎಂಬ ಪದಗಳ ಬದಲಿಗೆ "ಎಂಟು ವರ್ಷಗಳ" ಎಂಬ ಪದಗಳನ್ನು ಪ್ರತಿಸ್ಥಾಪಿಸತಕ್ಕದ್ದು.

(ii) "ಆರು ವರ್ಷಗಳ" ಎಂಬ ಪದಗಳ ಬದಲಿಗೆ "ಒಂಭತ್ತು ವರ್ಷಗಳ" ಎಂಬ ಪದಗಳನ್ನು ಪ್ರತಿಸ್ಥಾಪಿಸತಕ್ಕದ್ದು.

(ಬಿ) ಉಪ ನಿಯಮ (2)ರಲ್ಲಿ,– "ಐದು ವರ್ಷಗಳ" ಎಂಬ ಪದಗಳ ಬದಲಿಗೆ "ಎಂಟು ವರ್ಷಗಳ" ಎಂಬ ಪದಗಳನ್ನು ಪ್ರತಿಸ್ಥಾಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗಾಯತ್ರಿ. ಎಂ.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 1000

ಅನುಬಂಧ - 6

RNI No. KARBIL/2001/47147



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ– III | ಬೆಂಗಳೂರು, ಸೋಮವಾರ, ಫೆಬ್ರವರಿ ೧೫, ೨೦೧೬ (ಮಾಘ ೨೬, ಶಕ ವರ್ಷ ೧೯೩೭) | ನಂ. ೩೦೨ |
|---|---|---|
| Part–III | Bengaluru, Monday, February 15, 2016 (Magha 26, Shaka Varsha 1937) | No. 302 |



ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

ಸುತ್ತೋಲೆ

ಸಂಖ್ಯೆ: ಸಿಆಸುಇ 96 ಸೇವನೆ 2015, ಬೆಂಗಳೂರು, ದಿನಾಂಕ: 15.02.2016

**ವಿಷಯ :** ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಗೆ ಹಾಜರಾಗುವ ಅಧಿಕಾರಿ/ನೌಕರರಿಗೆ ಓ.ಓ.ಡಿ. ನೀಡುವ ಬಗ್ಗೆ ಸ್ಪಷ್ಟೀಕರಣ.

**ಉಲ್ಲೇಖ :** ಅಧಿಸೂಚನೆ ಸಂಖ್ಯೆ: ಸಿ.ಆ.ಸು.ಇ. 43 ಸೇವನೆ 2008 ದಿನಾಂಕ: 07.03.2012

ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012 ರನ್ವಯ ಕೆಲವೊಂದು ಹುದ್ದೆಗಳನ್ನು ಹೊರತುಪಡಿಸಿ ಉಳಿದ ನೌಕರರು/ಅಧಿಕಾರಿಗಳು ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ ಪಾಸು ಮಾಡುವುದು ಕಡ್ಡಾಯವಾಗಿರುತ್ತದೆ.

ಸದರಿ ಪರೀಕ್ಷೆಯನ್ನು ನಡೆಸುವ ಜವಾಬ್ದಾರಿಯನ್ನು ಕಿಯೋನಿಕ್ಸ್ ಸಂಸ್ಥೆಗೆ ವಹಿಸಲಾಗಿದೆ. ಈ ಪರೀಕ್ಷೆಗಳು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ನಡೆಯುತ್ತವೆ. ಆದುದರಿಂದ, ಸದರಿ ಪರೀಕ್ಷೆಗೆ ಹಾಜರಾಗುವ ಅಧಿಕಾರಿ/ನೌಕರರು ತಮ್ಮ ಇಲಾಖೆಯ ಮೇಲಾಧಿಕಾರಿಗಳಿಂದ ಅನುಮತಿ ಪಡೆದು ಪರೀಕ್ಷೆಗೆ ಹಾಜರಾದ ದಿನಾಂಕದಂದು ಇಲಾಖಾ ಪರೀಕ್ಷೆಗಳಿಗಿರುವಂತೆ ಓ.ಓ.ಡಿ. (ಅನ್ಯ ಕಾರ್ಯ ನಿಮಿತ್ತ) ಎಂದು ಪರಿಗಣಿಸಬೇಕೇ ಎಂದು ಸ್ಪಷ್ಟೀಕರಣ ನೀಡುವಂತೆ ಹಲವು ಇಲಾಖೆಗಳು ಕೋರುತ್ತಿವೆ.

ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 8 (15) (d) ರಲ್ಲಿನ ಅವಕಾಶವನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 132 ಮತ್ತು 134ಎ ರೊಂದಿಗೆ ಓದಲಾದ ರೀತ್ಯ ಅದರಲ್ಲಿ ತಿಳಿಸಿರುವ ಅವಕಾಶಗಳಿಗೆ ಸೀಮಿತಗೊಳಿಸಿ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಗೆ ಹಾಜರಾಗುವ ನೌಕರರು/ಅಧಿಕಾರಿಗಳು ಕರ್ತವ್ಯದ ಮೇಲಿರುವರೆಂದೇ ಪರಿಗಣಿಸಬಹುದು ಎಂದು ಈ ಮೂಲಕ ತಿಳಿಸಿದೆ.

**ಗಾಯತ್ರಿ ಎಂ.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7)100 ಪ್ರತಿಗಳು)

RNI No. KARBIL/2001/47147

ಅನುಬಂಧ - 7



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ-III | ಬೆಂಗಳೂರು, ಸೋಮವಾರ, ಜನವರಿ ೨೩, ೨೦೧೭ (ಮಾಘ ೦೩, ಶಕ ವರ್ಷ ೧೯೩೮) | ನಂ. ೯೦ |
|---|---|---|
| *Part-III* | *Bengaluru, Monday, January 23, 2017 (Magha 03, Shaka Varsha 1938)* | *No. 90* |



**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ: ಸಿಆಸುಇ 95 ಸೇವನೆ 2016, ಬೆಂಗಳೂರು, ದಿನಾಂಕ: 23.01.2017**

**ವಿಷಯ:** ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಪ್ರೋತ್ಸಾಹಧನ ನೀಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 43 ಸೇವನೆ 2008, ದಿನಾಂಕ: 07.03.2012

2) ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 876 ಸೇ-1/2016, ದಿನಾಂಕ:17.12.2016

ಮೇಲೆ ಉಲ್ಲೇಖಿಸಿರುವ ದಿನಾಂಕ: 07.03.2012ರ ಅಧಿಸೂಚನೆಯಲ್ಲಿ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ಎಲ್ಲಾ ಸರ್ಕಾರಿ ನೌಕರರಿಗೆ ರೂ.5,000/- ಗಳ (ಐದು ಸಾವಿರ ರೂಪಾಯಿಗಳು) ಪ್ರೋತ್ಸಾಹ ಧನವನ್ನು ನೀಡಬೇಕೆಂದು ತಿಳಿಸಲಾಗಿದೆ. ಈ ಪ್ರೋತ್ಸಾಹಧನವನ್ನು ಉಲ್ಲೇಖ (2)ರಲ್ಲಿರುವ ಆರ್ಥಿಕ ಇಲಾಖೆಯ ದಿನಾಂಕ:17.12.2016ರ ಅನಧಿಕೃತ ಟಿಪ್ಪಣಿಯಲ್ಲಿ ನೀಡಲಾಗಿರುವ ಸೂಚನೆಯನ್ವಯ ಸರ್ಕಾರಿ ನೌಕರರು ವೇತನ ಪಡೆಯುವ ಲೆಕ್ಕಶೀರ್ಷಿಕೆಯಡಿಯ "Subsidiary expenses" ಉಪ ಲೆಕ್ಕಶೀರ್ಷಿಕೆಯಲ್ಲಿ ಭರಿಸಬಹುದಾಗಿದೆ.

ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ಸಿಬ್ಬಂದಿ ಕಂಪ್ಯೂಟರ್‌ನಿಂದ ಡೌನ್‌ಲೋಡ್ ಮಾಡಲ್ಪಟ್ಟ ಹಾಗೂ ಯಾವುದೇ ದೃಢೀಕರಣ ಅಥವಾ ಸಹಿ ಹೊಂದಿರದ ಅಂಕಪಟ್ಟಿಯನ್ನು ಲಗತ್ತಿಸಿ ಪ್ರೋತ್ಸಾಹಧನ ಪಾವತಿಸಲು ಕೋರಿಕೆಗಳನ್ನು ಸಲ್ಲಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ.

ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ಸರ್ಕಾರಿ ನೌಕರರಿಗೆ ಸರ್ಕಾರದಿಂದ ನೀಡಲ್ಪಡುವ ಪ್ರಮಾಣ ಪತ್ರದ ನಮೂನೆಯನ್ನು ಅಂತಿಮಗೊಳಿಸುವ ಹಾಗೂ ಸದರಿ ಪ್ರಮಾಣ ಪತ್ರವನ್ನು ಸರ್ಕಾರದ ಪರವಾಗಿ ನೀಡುವ ಏಜೆನ್ಸಿಯನ್ನು ಗುರುತಿಸುವ ವಿಷಯವು ಇನ್ನೂ ಪರಿಶೀಲನೆಯಲ್ಲಿರುತ್ತದೆ. ಈ ವಿಷಯವು ಅಂತಿಮಗೊಳ್ಳುವವರೆಗೆ ಅನಧಿಕೃತ ಕಾಗದ ಪತ್ರಗಳ ಆಧಾರದ ಮೇಲೆ ರೂ.5,000/-ಗಳ ಪ್ರೋತ್ಸಾಹ ಧನವನ್ನು ಪಾವತಿ ಮಾಡುವ ಯಾವುದೇ ಪ್ರಸ್ತಾವನೆಯನ್ನು ಪರಿಶೀಲಿಸದಿರುವಂತೆ, ಮಂಜೂರು ಮಾಡದಿರುವಂತೆ ಹಾಗೂ ಡ್ರಾ ಮಾಡಿ ಪಾವತಿಸದಿರುವಂತೆ ತಿಳಿಸಲಾಗಿದೆ.

ಮೇಲ್ಕಂಡ ಸೂಚನೆಯನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ರಾಜ್ಯದ ಎಲ್ಲಾ ಇಲಾಖೆಗಳಿಗೆ ಈ ಮೂಲಕ ಸೂಚಿಸಲಾಗಿದೆ.

**ಗಾಯತ್ರಿ ಎಂ.ಆರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು-1)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 1000 ಪ್ರತಿಗಳು

ಅನುಬಂಧ - 8

**ಕರ್ನಾಟಕ ಸರ್ಕಾರ**

ಸಂಖ್ಯೆ: ಸಿಆಸುಇ 24 ಸೇವನೆ 2017

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ
ಬೆಂಗಳೂರು, ದಿನಾಂಕ: 03.01.2018.

**ಸುತ್ತೋಲೆ**

ವಿಷಯ: ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಅಕ್ರಮವೆಸಗಿದ ನೌಕರರ ಮೇಲೆ ಶಿಸ್ತುಕ್ರಮ ಕೈಗೊಳ್ಳುವ ಬಗ್ಗೆ.
ಉಲ್ಲೇಖ: ಅಧಿಸೂಚನೆ ಸಂಖ್ಯೆ: ಸಿಆಸುಇ 43 ಸೇವನೆ 2008 ದಿನಾಂಕ: 07.03.2012

****

ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012 ರನ್ವಯ ಕೆಲವೊಂದು ಹುದ್ದೆಗಳನ್ನು ಹೊರತುಪಡಿಸಿ ಉಳಿದ ನೌಕರರು/ಅಧಿಕಾರಿಗಳು ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ ಪಾಸು ಮಾಡುವುದು ಕಡ್ಡಾಯವಾಗಿರುತ್ತದೆ.

ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ನ್ಯಾಯೋಚಿತ ರೀತಿಯಲ್ಲಿ ನಡೆಸಲು ಅನುವಾಗುವಂತೆ ಸರ್ಕಾರವು ಕೆಲವು ಸೂಚನೆಗಳನ್ನು ನೀಡುವುದು ಅವಶ್ಯವಾಗಿರುತ್ತದೆ. ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ತೆಗೆದುಕೊಂಡ ಸರ್ಕಾರಿ ನೌಕರನ ಬದಲಾಗಿ ಬೇರೊಬ್ಬರು ಪರೀಕ್ಷೆ ಬರೆದಲ್ಲಿ ಅದನ್ನು ಕ್ರಿಮಿನಲ್ ಅಪರಾಧವೆಂದು ಪರಿಗಣಿಸಿ ಅಂತಹ ವ್ಯಕ್ತಿಯನ್ನು ಭಾರತೀಯ ದಂಡ ಸಂಹಿತೆ, 1860ರ ಸೆಕ್ಷನ್ 419ರ ಪರಿಣಾಮಗಳಿಗೆ ಒಳಪಡಿಸುವುದಲ್ಲದೆ, ಇಂತಹ ವಂಚನೆ ಎಸಗಲು ಕಾರಣನಾದ ಸರ್ಕಾರಿ ನೌಕರನ ವಿರುದ್ಧವೂ ಭಾರತೀಯ ದಂಡ ಸಂಹಿತೆ, 1860ರ ಸೆಕ್ಷನ್ 417ರಡಿ ಕ್ರಮ ಕೈಗೊಳ್ಳಬೇಕಾಗುತ್ತದೆ ಹಾಗೂ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರಡಿ ಶಿಸ್ತು ಕ್ರಮಕ್ಕೆ ಒಳಪಡಿಸಬೇಕಾಗುತ್ತದೆ. ಎಲ್ಲಾ ಸಕ್ಷಮ ಪ್ರಾಧಿಕಾರಗಳು ಅಕ್ರಮವೆಸಗಿದ ನೌಕರರ ವಿರುದ್ಧ ಕಟ್ಟುನಿಟ್ಟಾಗಿ ಕ್ರಮವಹಿಸುವಂತೆ ಸೂಚಿಸಲಾಗಿದೆ.

Gayathri. M.R
03/01/2018
(ಗಾಯತ್ರಿ ಎಂ.ಆರ್.)
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–I)

**ಇವರಿಗೆ,**
ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ ಇವರಿಗೆ–ಇದನ್ನು ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರ 100 ಪ್ರತಿಗಳನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಸೇವಾ ನಿಯಮಗಳು–I, ಕೊಠಡಿ ಸಂಖ್ಯೆ: 31, ವಿಧಾನಸೌಧ, ಬೆಂಗಳೂರು ಇವರಿಗೆ ಕಳುಹಿಸಿಕೊಡಲು ಕೋರಿದೆ.

ಪ್ರತಿ:

1. ಪ್ರಧಾನ ಮಹಾಲೇಖಪಾಲರು (ಜಿ&ಎಸ್ಎಸ್ಎ)/(ಇ&ಆರ್ಎಸ್-ಎ)/(ಎ&ಇ).
2. ಸರ್ಕಾರದ ಮುಖ್ಯ ಕಾರ್ಯದರ್ಶಿಯವರು.
3. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು.
4. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು ಹಾಗೂ ಅಭಿವೃದ್ಧಿ ಆಯುಕ್ತರು.
5. ಸರ್ಕಾರದ ಎಲ್ಲಾ ಅಪರ ಮುಖ್ಯ ಕಾರ್ಯದರ್ಶಿಗಳು/ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು.
6. ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಗಳು.
7. ರಾಜ್ಯಪಾಲರ ವಿಶೇಷ ಕಾರ್ಯದರ್ಶಿಯವರು.
8. ಎಲ್ಲಾ ಇಲಾಖಾ ಮುಖ್ಯಸ್ಥರು/ಎಲ್ಲಾ ಜಿಲ್ಲಾಧಿಕಾರಿಗಳು/ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು.
9. *ಮಹಾ ನಿಬಂಧಕರು, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು.
10. *ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು.
11. *ನಿಬಂಧಕರು, ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿ, ಕಂದಾಯ ಭವನ, ಕೆ.ಜಿ.ರಸ್ತೆ, ಬೆಂಗಳೂರು.
12. *ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.
13. *ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ/ಪರಿಷತ್ತು, ಬೆಂಗಳೂರು.
14. ಎಲ್ಲಾ ಸಚಿವರ/ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿಗಳು
15. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು.
16. ಸರ್ಕಾರದ ಎಲ್ಲಾ ವಿಶೇಷ/ಅಪರ/ಜಂಟಿ/ಉಪ/ಅಧೀನ ಕಾರ್ಯದರ್ಶಿಗಳು
17. ಸಚಿವಾಲಯದ ಎಲ್ಲಾ ಶಾಖೆಗಳು
18. ಸಚಿವ ಸಂಪುಟ ಶಾಖೆ
19. ಪತ್ರಿಕಾ ಪ್ರಕಟಣೆ
20. ವಾರದ ರಾಜ್ಯಪತ್ರ
21. ಶಾಖಾ ರಕ್ಷಾ ಕಡತ/ಜಿಡಿ ಪ್ರತಿಗಳು.

(*ಮುಖಪತ್ರದೊಂದಿಗೆ)

ಅನುಬಂಧ-9

ಕರ್ನಾಟಕ ಸರ್ಕಾರ

ಸಂಖ್ಯೆ: ಸಿಆಸುಇ 66 ಸೇವನೆ 2018

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ: 18.09.2018

## ಅಧಿಸೂಚನೆ

ಕರ್ನಾಟಕ ಸಿವಿಲ್ ಸೇವಾ (ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆ) ನಿಯಮಗಳು, 2012ರ ನಿಯಮ 1ರ ಉಪ ನಿಯಮ 3ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆ ಇಲಾಖೆಗೆ ಸಂಬಂಧಿಸಿದ ಈ ಕೆಳಕಂಡ ಗ್ರೂಪ್ "ಸಿ" ಹುದ್ದೆಗಳಿಗೆ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಿಂದ ವಿನಾಯಿತಿ ನೀಡಿ ಅಧಿಸೂಚಿಸಿದೆ:-

"ಬಡ್ತಿ ಹೊಂದಿದ ಅಗ್ರಕಾರ್ಮಿಕರು, ಲೈನೋಮೋನೋ ಆಪರೇಟರ್, ಹಿರಿಯ ಆಫ್‌ಸೆಟ್ ಮುದ್ರಕರು, ಎಲೆಕ್ಟ್ರಿಷಿಯನ್, ಮೆಕಾನಿಕಲ್ ಫೋರ್‌ಮನ್, ಪ್ರೋಸಸ್ ಆಪರೇಟರ್, ಹಿರಿಯ ಅಕ್ಷರ ಸಂಯೋಜಕರು, ಹಿರಿಯ ಬೈಂಡರ್, ಸೀನಿಯರ್ ಪ್ಲೇಟ್ ಮೇಕರ್, ಹಿರಿಯ ಯಂತ್ರ ಚಾಲಕರು, ಮುಖ್ಯ ಸಮಯ ಪಾಲಕರು, ಹೆಡ್ ಕ್ಯಾಸ್ಟರ್, ಆಫ್‌ಸೆಟ್ ಮುದ್ರಕರು, ವೈರ್‌ಮೆನ್, ಮೆಕಾನಿಕ್, ಹೆಡ್ ಕಾರ್ಪೆಂಟರ್, ಸೀನಿಯರ್ ಕಾರ್ಪೆಂಟರ್, ಕ್ಯಾಸ್ಟರ್, ಯಂತ್ರ ಚಾಲಕರು, ಕಾರ್ಪೆಂಟರ್, ಪ್ಲೇಟ್ ಮೇಕರ್, ಸಮಯ ಪಾಲಕರು, ರಬ್ಬರ್ ಸ್ಟಾಂಪ್ ಕ್ಯಾಸ್ಟರ್, ಅಸಿಸ್ಟೆಂಟ್ ಮೆಕಾನಿಕ್, ಅಕ್ಷರ ಸಂಯೋಜಕರು, ಬೈಂಡರ್, ಸಹಾಯಕ ಆಫ್‌ಸೆಟ್ ಮುದ್ರಕರು, ಹೆಡ್ ಪ್ಯಾಕರ್."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

Gayathri. M.R
18/9/18
(ಗಾಯತ್ರಿ, ಎಂ.ಆರ್.)
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
ಬಿ.(ಸೇವಾ ನಿಯಮಗಳು-1)

ಇವರಿಗೆ,
ಸಂಕಲನಕಾರರು, ಕರ್ನಾಟಕ ರಾಜ್ಯಪತ್ರ ಇವರಿಗೆ – ಇದನ್ನು ವಿಶೇಷ ರಾಜ್ಯಪತ್ರದಲ್ಲಿ ಪ್ರಕಟಿಸಿ ಅದರ 100 ಪ್ರತಿಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು-ಬಿ)ಗೆ ಕಳುಹಿಸಿಕೊಡಲು ಕೋರಿದೆ.

ಪ್ರತಿ:
1. ಪ್ರಧಾನ ಮಹಾಲೇಖಪಾಲರು (ಜಿ&ಎಸ್‌ಎಸ್‌ಎ)/(ಇ&ಆರ್‌ಎಸ್-ಎ) ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ, ಬೆಂಗಳೂರು-560001.

2. ಪ್ರಧಾನ ಮಹಾಲೇಖಪಾಲರು (ಎ&ಇ), ಕರ್ನಾಟಕ, ಪಾರ್ಕ್ ಹೌಸ್ ರಸ್ತೆ, ಬೆಂಗಳೂರು-560001.
3. ಸರ್ಕಾರದ ಮುಖ್ಯ ಕಾರ್ಯದರ್ಶಿಯವರು.
4. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು.
5. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು ಹಾಗೂ ಅಭಿವೃದ್ಧಿ ಆಯುಕ್ತರು.
6. ಸರ್ಕಾರದ ಎಲ್ಲಾ ಅಪರ ಮುಖ್ಯ ಕಾರ್ಯದರ್ಶಿಗಳು/ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು.
7. ಮುಖ್ಯಮಂತ್ರಿಯವರ ಅಪರ ಮುಖ್ಯ ಕಾರ್ಯದರ್ಶಿ/ ಕಾರ್ಯದರ್ಶಿ.
8. ರಾಜ್ಯಪಾಲರ ವಿಶೇಷ ಕಾರ್ಯದರ್ಶಿಯವರು.
9. ಎಲ್ಲಾ ಇಲಾಖಾ ಮುಖ್ಯಸ್ಥರು/ಎಲ್ಲಾ ಜಿಲ್ಲಾಧಿಕಾರಿಗಳು/ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು.
10. ನಿವಾಸಿ ಆಯುಕ್ತರು, ಕರ್ನಾಟಕ ಭವನ, ಕೌಟಿಲ್ಯ ಮಾರ್ಗ, ಚಾಣಕ್ಯಪುರಿ, ನವದೆಹಲಿ-110 111
11. *ಮಹಾ ನಿಬಂಧಕರು, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು.
12. *ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು.
13. *ನಿಬಂಧಕರು, ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿ, ಕಂದಾಯ ಭವನ, ಕೆ.ಜಿ.ರಸ್ತೆ, ಬೆಂಗಳೂರು.
14. *ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.
15. *ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ/ಪರಿಷತ್ತು, ಬೆಂಗಳೂರು.
16. ಎಲ್ಲಾ ಸಚಿವರ/ರಾಜ್ಯ ಸಚಿವರ ಆಪ್ತ ಕಾರ್ಯದರ್ಶಿಗಳು
17. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಕಬ್ಬನ್ ಉದ್ಯಾನವನ, ಬೆಂಗಳೂರು.
18. ಸರ್ಕಾರದ ಎಲ್ಲಾ ವಿಶೇಷ/ಅಪರ/ಜಂಟಿ/ಉಪ/ಅಧೀನ ಕಾರ್ಯದರ್ಶಿಗಳು
19. ಶಾಖಾ ರಕ್ಷಾ ಕಡತ/ಬಿಡಿ ಪ್ರತಿಗಳು.

(*ಮುಖಪತ್ರದೊಂದಿಗೆ)